# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 390
ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಆರ್. ಪ್ರಸನ್ನಕುಮಾರ್
ಉತ್ತರಿಸಬೇಕಾದ ದಿನಾಂಕ : 11.12.2020
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರತಿ ವರ್ಷ ಡಿಸೆಂಬರ್ 3 ರಂದು ಅಂಗವಿಕಲರ ದಿನಾಚರಣೆಯನ್ನು ರಾಜ್ಯ ಸರ್ಕಾರ ಆಚರಿಸುತ್ತಿರುವುದು ನಿಜವೇ; | ಪ್ರತಿ ವರ್ಷ ಡಿಸೆಂಬರ್ 3 ರಂದು ವಿಕಲಚೇತನರ ದಿನಾಚರಣೆಯನ್ನು ರಾಜ್ಯ ಸರ್ಕಾರ ಆಚರಿಸುತ್ತಿರುವುದು ನಿಜ. |
| ಆ) | ಹಾಗಿದ್ದಲ್ಲಿ, ಅಂಗವಿಕಲರಿಗಾಗಿ ಅನೇಕ ಸವಲತ್ತುಗಳನ್ನು ಪಡೆಯಲು ಸರ್ಕಾರದ ನೀತಿ ನಿಯಮಗಳು ಅಡ್ಡಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ತೆಗೆದುಕೊಂಡ ಕ್ರಮವೇನು: (ವಿವರ ನೀಡುವುದು) | ಅನೇಕ ಸವಲತ್ತುಗಳನ್ನು ಪಡೆಯಲು ಸರ್ಕಾರದ ನೀತಿ ನಿಯಮಗಳು ಅಡ್ಡಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಇ) | ಅಂಗವಿಕಲರ ಮಾಸಿಕ ಪಿಂಚಣಿ ಪಡೆಯಲು ಪೋಷಕರ ವಾರ್ಷಿಕ ವರಮಾನ ರೂ.11,500ಕ್ಕೆ ನಿಗದಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಸರ್ಕಾರ ಅಂಗವಿಕಲರ ನೆರವಿಗೆ ಯಾವ ರೀತಿ ಕಾರ್ಯಕ್ರಮ ರೂಪಿಸಿದೆ? (ವಿವರ ನೀಡುವುದು) | • ವಿಕಲಚೇತನರ ಮಾಸಿಕ ಪಿಂಚಣಿ ಪಡೆಯಲು ಪೋಷಕರ ವಾರ್ಷಿಕ ವರಮಾನ ಗ್ರಾಮೀಣ ಪ್ರದೇಶದಲ್ಲಿ ವಾರ್ಷಿಕ ಆದಾಯ ರೂ.12,000/- ಹಾಗೂ ನಗರ ಪ್ರದೇಶಗಳಲ್ಲಿ ವಾರ್ಷಿಕ ಆದಾಯ ರೂ.17,000/- ನಿಗದಿ ಮಾಡಲಾಗಿರುತ್ತದೆ.<br>• ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ/47/ಡಿಎಸ್‌ಪಿ/2018, ಬೆಂಗಳೂರು ದಿನಾಂಕ:16.03.2018 ರಂತೆ ಶೇಕಡಾ 40 ರಿಂದ 75 ರಷ್ಟು ಅಂಗವೈಕಲ್ಯವಿರುವ ಅರ್ಹ ವಿಕಲಚೇತನರಿಗೆ ನೀಡಲಾಗುತ್ತಿದ್ದ ಮಾಸಾಶನವನ್ನು ರೂ.500/- ರಿಂದ ರೂ.600/-ಗಳಿಗೆ ಹಾಗೂ ಶೇಕಡಾ 75 ಕ್ಕಿಂತ ಹೆಚ್ಚು ಅಂಗವೈಕಲ್ಯವಿರುವ ಅರ್ಹ ವಿಕಲಚೇತನರಿಗೆ ನೀಡಲಾಗುತ್ತಿದ್ದ ಮಾಸಾಶನವನ್ನು ರೂ.1,200/- ರಿಂದ ರೂ.1,400/-ಗಳನ್ನು ಹೆಚ್ಚಿಸಲಾಗಿದೆ. |
| ಈ) | ಬಂದಿದ್ದಲ್ಲಿ, ವರಮಾನ ನಿಗದಿಯನ್ನು ಕಾಲಕಾಲಕ್ಕೆ ಪರಿಷ್ಕರಣೆ ಮಾಡದಿರುವುದರಿಂದ ಅಂಗವಿಕಲರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅಂಗವಿಕಲರ ನೆರವಿಗೆ ರೂಪಿಸಿದ ಸರ್ಕಾರದ ಕಾರ್ಯಕ್ರಮಗಳಾವುವು? | ವರಮಾನ ನಿಗದಿಯನ್ನು ಕಾಲಕಾಲಕ್ಕೆ ಪರಿಷ್ಕರಣೆ ಮಾಡದಿರುವುದರಿಂದ ವಿಕಲಚೇತನರಿಗೆ ತೊಂದರೆಯಾಗಿರುವುದರ ಬಗ್ಗೆ ಮಹಿಳಾ ಮತ್ತು ಮಕ್ಕಳ ಸಮಿತಿ ಸಭೆಯಲ್ಲಿ ಚರ್ಚಿಸಿ ಶಿಫಾರಸ್ಸು ಮಾಡಿದಂತೆ ವಿಕಲಚೇತನರ ಪೋಷಣಾ ಭತ್ಯೆಯನ್ನು ಪಡೆಯಲು ಆದಾಯ ಮಿತಿಯನ್ನು ರದ್ದುಗೊಳಿಸುವ ಬಗ್ಗೆ ಆರ್ಥಿಕ ಇಲಾಖೆಯು ಕೋರಿರುವ ಮಾಹಿತಿಯನ್ನು ಒದಗಿಸಲು ಕ್ರಮವಹಿಸಲಾಗುತ್ತಿದೆ. |

**ಸಂಖ್ಯೆ: ಮಮಇ 299 ಪಿಹೆಚ್‌ಪಿ 2020**

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ
ಸಚಿವರು